


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ಗುರುತಿನ ಪ್ರಶ್ನೆ**

ದಿನಾಂಕ : 16-03-2021 ಪ್ರಶ್ನೆ ಸಂಖ್ಯೆ : 182 (1195)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಮೋಹನ್‌ಕುಮಾರ್ ಕೊಂಡಜ್ಜಿ (ನಾಮನಿರ್ದೇಶನ ಹೊಂದಿದವರು)

ಉತ್ತರ ನೀಡಬೇಕಾದ ದಿನಾಂಕ : 16-03-2021

ಉತ್ತರಿಸುವ ಸಚಿವರು: ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು

ವಿಷಯ : ಬೆಂಗಳೂರು ಅಂತಾರಾಷ್ಟ್ರೀಯ ಚಲನ ಚಿತ್ರೋತ್ಸವದ ಖರ್ಚು ವೆಚ್ಚಗಳ ಕುರಿತು

(ಅ) ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ ಮತ್ತು ಕರ್ನಾಟಕ ಚಲನಚಿತ್ರ ಅಕಾಡೆಮಿಯ ಸಹಯೋಗದೊಂದಿಗೆ ಕಳೆದ ಮೂರು ವರ್ಷಗಳಲ್ಲಿ ಬೆಂಗಳೂರು ಅಂತಾರಾಷ್ಟ್ರೀಯ ಚಲನಚಿತ್ರೋತ್ಸವಕ್ಕೆ ಮಾಡಲಾದ ಒಟ್ಟು ವೆಚ್ಚಗಳು ಮತ್ತು ಆಡಳಿತಾತ್ಮಕ ವೆಚ್ಚಗಳೆಷ್ಟು ; (ಪ್ರತ್ಯೇಕವಾಗಿ ಸಂಪೂರ್ಣ ವಿವರ ನೀಡುವುದು)

(ಆ) ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದ ಉದ್ಘಾಟನಾ ಮತ್ತು ಮುಕ್ತಾಯ ಸಮಾರಂಭಕ್ಕೆ ಮಾಡಲಾದ ಖರ್ಚುಗಳು ಎಷ್ಟು ; (ಸಂಪೂರ್ಣ ವಿವರ ನೀಡುವುದು)

(ಇ) ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಪ್ರದರ್ಶನ ಮಾಡಿದ ಚಲನಚಿತ್ರಗಳಿಗೆ ರಾಜಸ್ವ (Royalty) ರೂಪದಲ್ಲಿ ಸಂದಾಯ ಮಾಡಿದ ಹಣವೆಷ್ಟು ; (ಸಂಪೂರ್ಣ ವಿವರ ನೀಡುವುದು)

(ಈ) ಅಂತಾರಾಷ್ಟ್ರೀಯ ಚಲನಚಿತ್ರೋತ್ಸವದಲ್ಲಿ ಸಿಗ್ನೇಚರ್ ಫಿಲ್ಮ್‌ಗೆ ತಗುಲಿದ ವೆಚ್ಚವೆಷ್ಟು ; (ಸಂಪೂರ್ಣ ವಿವರ ನೀಡುವುದು)

(ಉ) ಅಂತಾರಾಷ್ಟ್ರೀಯ ಚಲನಚಿತ್ರೋೀತ್ಸವದಲ್ಲಿ 4ಜಿ ವಿನಾಯಿತಿಯನ್ನು ನೀಡಲಾಯಿತೇ; (ವಿವರಗಳನ್ನು ನೀಡುವುದು)

(ಊ) ಪ್ರಸಕ್ತ ಬೆಂಗಳೂರು ಅಂತಾರಾಷ್ಟ್ರೀಯ ಚಲನಚಿತ್ರೋತ್ಸವಕ್ಕೆ ಮಾಡಲಾಗುತ್ತಿರುವ ಒಟ್ಟು ವೆಚ್ಚಗಳು ಎಷ್ಟು ? (ಉದ್ಘಾಟನಾ ಮತ್ತು ಮುಕ್ತಾಯ ಸಮಾರಂಭದ ವಿವರಗಳನ್ನು ಪ್ರತ್ಯೇಕವಾಗಿ ವಿವರ ನೀಡುವುದು)